# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ ಡಿಸೆಂಬರ್ ೮, ೨೦೧೬ (ಮಾರ್ಗಶಿರ ೧೭, ಶಕ ವರ್ಷ ೧೯೩೮)<br>Bengaluru, Thursday, December 8, 2016 (Margashira 17, Shaka Varsha 1938) | ಸಂಚಿಕೆ ೪೮<br>Issue 48 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಆರ್.ವೆಂಕಟೇಶ್ ಪದಕಿ, ಅಬಕಾರಿ ಉಪ ಆಯುಕ್ತರು, ವಿಜಯ ಪುರ ಇವರ ವಿರುದ್ದ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಉಪಲೋಕಾಯುಕ್ತ–2 ರವರಿಗೆ ವಹಿಸುವ ಬಗ್ಗೆ.

**ಓದಲಾಗಿದೆ :** ಉಪ ನಿಬಂಧಕರು ವಿಚಾರಣೆಗಳು–1, ಕರ್ನಾಟಕ ಲೋಕಾಯುಕ್ತ ಬೆಂಗಳೂರು, ಇವರ ಅ.ಸ.ಪ ಸಂಖ್ಯೆ: ಕಂಪ್ಲೇಂಟ್/ಉಪಲೋಕ್/ಎಂವೈಎಸ್–2828/2015/ಡಿಆರ್ಇ–1, ದಿನಾಂಕ: 06–02–2016.

**ಪ್ರಸ್ತಾವನೆ :**

ಕರ್ನಾಟಕ ಲೋಕಾಯುಕ್ತ ಕಛೇರಿಯ ಉಪ ನಿಬಂಧಕರು, ವಿಚಾರಣೆಗಳು–1, ಇವರು ಮೇಲೆ ಓದಲಾದ ಪತ್ರದಲ್ಲಿ ಶ್ರೀ ಆರ್.ವೆಂಕಟೇಶ್ ಪದಕಿ, ಅಂದಿನ ಅಬಕಾರಿ ಉಪ ಆಯುಕ್ತರು, ಚಿಕ್ಕಮಗಳೂರು, ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ತಮ್ಮ ಕರ್ತವ್ಯ ಪಾಲನೆಯಲ್ಲಿ ನಿಷ್ಠೆಯನ್ನು ತೋರದೆ ಕರ್ತವ್ಯ ಲೋಪವೆಸಗಿ, ದುರ್ವತನೆ ತೋರಿಸಿ, ಸರ್ಕಾರಿ ನೌಕರಿಗೆ ತರವಲ್ಲದ ರೀತಿಯಲ್ಲಿ ನಡೆದುಕೊಂಡ ಬಗ್ಗೆ ಸನ್ಮಾನ್ಯ ಉಪ ಲೋಕಾಯುಕ್ತ–2 ರವರು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ 12(3) ರಡಿ ನೀಡಿರುವ ವರದಿ ಹಾಗೂ ಇತರೆ ದಾಖಲೆಗಳನ್ನು ಸರ್ಕಾರಕ್ಕೆ ಕಳುಹಿಸಿ ವರದಿ ಮೇಲೆ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ. ಸನ್ಮಾನ್ಯ ಉಪ ಲೋಕಾಯುಕ್ತ–2 ರವರ ವರದಿ ಮತ್ತು ತನಿಖೆಗೆ ಸಂಬಂಧಪಟ್ಟ ದಾಖಲೆಗಳನ್ನು ಪರಿಶೀಲಿಸಲಾಗಿದೆ.

ಶ್ರೀ ಆರ್.ವೆಂಕಟೇಶ್ ಪದಕಿ, ಅಂದಿನ ಅಬಕಾರಿ ಉಪ ಆಯುಕ್ತರು, ಚಿಕ್ಕಮಗಳೂರು ಇವರು ಚಿಕ್ಕಮಗಳೂರು ಜಿಲ್ಲೆಯ ಎಲ್ಲಾ ಮದ್ಯದಂಗಡಿಗಳಿಗೆ ಅಕ್ರಮ ಮಾಮೂಲು ಹಣಕ್ಕೆ ನಿಗದಿಪಡಿಸಿ ಅದನ್ನು ತಾಲ್ಲೂಕಿನ ಮಧ್ಯವರ್ತಿಗಳಿಂದ ವಸೂಲು ಮಾಡಿಕೊಂಡು ಆ ಹಣವನ್ನು ಇಲಾಖೆಯ ಸಿಬ್ಬಂದಿಯಾದ ಅಬಕಾರಿ ರಕ್ಷಕರಾದ ಶ್ರೀ ಮಂಜೇಗೌಡ  ಅಲಿಯಾಸ್ ಮಂಜಣ್ಣನವರ ಮೂಲಕ ಮೈಸೂರಿನ ತಮ್ಮ ಮನೆಗೆ ಸಾಗಿಸುತ್ತಾರೆಂದು, ಕೆಲವೊಮ್ಮೆ ಆರೋಪಿಯೇ ಅವರ ವಾಹನದಲ್ಲಿ ತೆಗೆದುಕೊಂಡು ಹೋಗುತ್ತಾರೆಂದು ಖಚಿತ ಮಾಹಿತಿ ಲೋಕಾಯುಕ್ತ ಪೊಲೀಸರಿಗೆ ಲಭಿಸಿದೆ. ಅದರಂತೆ ದಿನಾಂಕ:04–09–2014 ರಂದು ಚಿಕ್ಕಮಗಳೂರು ಲೋಕಾಯುಕ್ತ ಠಾಣೆಯಲ್ಲಿ ಭ್ರಷ್ಟಾಚಾರ ನಿಯಂತ್ರಣ ಕಾಯ್ದೆಯ ಕಲಂ 7,8, 13(1)(ಡಿ) ಜೊತೆಗೆ 13(2) ರಡಿ ಮೊಕದ್ದಮೆ ಸಂಖ್ಯೆ:07/2014 ದಾಖಲಿಸಿ ಲೋಕಾಯುಕ್ತ ಪೊಲೀಸರು ತನಿಖೆಯನ್ನು ಕೈಗೊಂಡಿರುತ್ತಾರೆ. ಆರೋಪಿಯು ದಿನಾಂಕ:04–09–2014 ರಂದು ಮಧ್ಯಾಹ್ನ 3.10 ಘಂಟೆಗೆ ಸ್ಯಾಂಟ್ರೋ ಹುಂಡೈ ನಂ.ಕೆಎ೦2ಎಂಡಿ 3529 ಕಾರಿನಲ್ಲಿ ಚಿಕ್ಕಮಗಳೂರಿನಿಂದ ಬೇಲೂರು ಕಡೆಗೆ ಹೋಗುವಾಗ ಚಿಕ್ಕಮಗಳೂರು ತಾಲ್ಲೂಕು ಕಸಬಾ ಹೋಬಳಿ ಮಾಗಡಿ ಗ್ರಾಮದ ಕೆರೆಯ ಹತ್ತಿರ ತನಿಖಾಧಿಕಾರಿಯವರು  ಈ ಕಾರನ್ನು ನಿಲ್ಲಿಸಿ ಪಂಚರ ಸಮಕ್ಷಮ ತಪಾಸಣೆ ಮಾಡಿದಾಗ ಕಾರಿನ ಡಿಕ್ಕಿ ಬಾಕ್ಸ್‌ನಲ್ಲಿಟ್ಟಿದ್ದ ಸೆಲ್ಫ್ ನಂಬರ್ ಲಾಕಿಂಗ್ ಸೂಟ್‌ಕೇಸ್‌ನಲ್ಲಿ ಬೇರೆ ಬೇರೆ ಕಾಗದದ ಕವರ್‌ಗಳಲ್ಲಿಟ್ಟಿದ್ದ ₹.6,85,257/– ದೊರೆಯಿತು. ಅದೇ ದಿನ ಈ ಹಣವನ್ನು ಪಂಚನಾಮೆ ಮೂಲಕ ತನಿಖಾಧಿಕಾರಿಯವರು ವಶಪಡಿಸಿಕೊಂಡು ಆರೋಪಿಯನ್ನು ದಸ್ತಗಿರಿ ಮಾಡಿರುತ್ತಾರೆ, ಈ ಹಣದ ಬಗ್ಗೆ ವಿಚಾರಿಸಿದಾಗ ತಮ್ಮ ಸ್ನೇಹಿತರಾದ ಶ್ರೀ ಮಲ್ಲಿಕಾರ್ಜುನವರವರಿಂದ 2 ದಿನಗಳ ಹಿಂದೆ ಸಾಲ ಪಡೆದಿರುವುದಾಗಿ ಸುಮಾರು ಆರು ಲಕ್ಷದ ಐವತ್ತು ಸಾವಿರ ಇರಬಹುದೆಂದು ಆರೋಪಿಯು ಉತ್ತರಿಸಿದ್ದಾರೆ. ಈ ಹಣವನ್ನು ಬೇರೆ ಬೇರೆ ಕವರ್‌ನಲ್ಲಿಟ್ಟಿರುವ ಬಗ್ಗೆ ವಿಚಾರಿಸಿದಾಗ ದೇವಸ್ಥಾನಕ್ಕೆ ಕೊಡುವುದಕ್ಕೆ ಇಟ್ಟುಕೊಂಡಿರುವುದಾಗಿ ಆರೋಪಿ ತಿಳಿಸಿದ್ದಾರೆ. ಶ್ರೀ ಮಲ್ಲಿಕಾರ್ಜುನರವರು ಲೋಕಾಯುಕ್ತ ಪೊಲೀಸರಿಗೆ ನೀಡಿದ ಹೇಳಿಕೆಯಲ್ಲಿ ತಾನು ಆರೋಪಿಯೊಂದಿಗೆ ಯಾವುದೇ ಹಣಕಾಸು ವ್ಯವಹಾರ ಇಲ್ಲವೆಂದು ತಿಳಿಸಿದ್ದಾರೆ. ಆದಕಾರಣ, ಸದರಿ ಅಕ್ರಮ ಹಣವು ಪ್ರಥಮ ವರ್ತಮಾನ ವರದಿಗೆ ಪೂರಕವಾಗಿರುವುದು ಕಂಡುಬಂದಿದೆ. ಅಕ್ರಮ ಹಣಕ್ಕೆ ಸೂಕ್ತ ಸಮಜಾಯಿಷಿ ನೀಡದಿರುವುದರಿಂದ ಆರೋಪಿಯು ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಈ ಮೊತ್ತವನ್ನು ಮದ್ಯದಂಗಡಿಗಳ ಮಾಲೀಕರುಗಳಿಂದ ಪಡೆದ ಅಕ್ರಮ ಹಣವಾಗಿರುವುದು ಮೇಲ್ನೋಟಕ್ಕೆ ಕಂಡುಬರುತ್ತಿದೆ.

ಇದರಿಂದಾಗಿ ಆರೋಪಿಯು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ನ್ನು ಉಲ್ಲಂಘಿಸಿರುವುದು ಕಂಡುಬಂದಿರುವುದರಿಂದ ದುರ್ನಡತೆಗಾಗಿ ಅಧಿಕಾರಿಯ ವಿರುದ್ಧ ಪೂರ್ಣಪ್ರಮಾಣದ ಇಲಾಖಾ ವಿಚಾರಣೆಯನ್ನು ತಮಗೆ ವಹಿಸುವಂತೆ ಸನ್ಮಾನ್ಯ ಉಪ ಲೋಕಾಯುಕ್ತ–2 ಅವರು ಶೀಫಾರಸ್ಸು ಮಾಡಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು, ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 22 ಇಪಿಎಸ್ 2016, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 14–ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಆರ್.ವೆಂಕಟೇಶ್ ಪದಕಿ, ಅಬಕಾರಿ ಉಪ ಆಯುಕ್ತರು, ವಿಜಯಪುರ, ಇವರ ವಿರುದ್ಧ ಮೇಲೆ ಹೇಳಲಾದ ಆರೋಪಗಳ ಕುರಿತು ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ನಡೆಸಲು ಪ್ರಕರಣವನ್ನು ಸನ್ಮಾನ್ಯ ಉಪ ಲೋಕಾಯುಕ್ತರು–2 ಅವರಿಗೆ ವಹಿಸಿ ಆದೇಶಿಸಿದೆ.

PR. 643

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವೆಂಕಟೇಶ್. ಜಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಅಬಕಾರಿ)

## ಅರಣ್ಯ ಇಲಾಖೆ

## ಸುತ್ತೋಲೆ

**ಸಂಖ್ಯೆ : ಅಪ್ರಮುಅಸಂ(ಅಸಂನಿ)ಬಿ3/ಸೇಲ್ಸ್/ಸೀ.ನಿ/ಚಿ.ಮಾ/ದರ/ವಿವ–40/2015–16, ಬೆಂಗಳೂರು, ದಿನಾಂಕ: 17.08.2016.**

**ವಿಷಯ :** ಕೆ.ಎಸ್.ಎಫ್.ಐ.ಸಿ. ನಿಗಮಕ್ಕೆ ಮರಗಳ ಮತ್ತು ಇತರೆ ಅರಣ್ಯ ಉತ್ಪತ್ತಿಯ ಟೆಂಕೆತನದ ತೀರುವಳಿ ದರಗಳ (Seigniorage Rates) ಮಂಜೂರಾತಿ ದಿನಾಂಕವನ್ನು ಪರಿಷ್ಕರಿಸುವ ಬಗ್ಗೆ.

**ಉಲ್ಲೇಖ :**
1. ಈ ಕಚೇರಿಯ ಸಮ ಸಂಖ್ಯೆಯ ಸುತ್ತೋಲೆ ದಿನಾಂಕ 29.03.2016.
2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ಇವರ ಪತ್ರ ಸಂಖ್ಯೆ: ಅ.ಸ.ಪ.ಸಂ./ಟಿಇಸಿ–4/ಸಿಆರ್–41/ಪಲ್ಪ್‌ವುಡ್‌ಪೂರೈಕೆ/2016–17, ದಿನಾಂಕ 06.04.2016.
3. ಈ ಕಛೇರಿ ಪತ್ರ ಸಮ ಸಂಖ್ಯೆ ದಿನಾಂಕ 11.05.2016.
4. ಸರ್ಕಾರದ ಪತ್ರ ಸಂಖ್ಯೆ: ಅಪಜೀ 68 ಎಫ್‌ಡಿಪಿ 2016, ದಿನಾಂಕ 27.07.2016.

ಈ ಕಛೇರಿಯ ಉಲ್ಲೇಖ(1)ರ ಸುತ್ತೋಲೆಯಲ್ಲಿ ಮರ ಮತ್ತು ಇತರೆ ಅರಣ್ಯ ಉತ್ಪತ್ತಿಯ ಟೆಂಕೆತನ ತೀರುವಳಿ ದರಗಳನ್ನು (Seigniorage Rates) ಪರಿಷ್ಕರಿಸಿ ದಿನಾಂಕ 01.03.2016 ರಿಂದ ಅನ್ವಯವಾಗುವಂತೆ ಜಾರಿಗೊಳಿಸಿ ಸುತ್ತೋಲೆ ಹೊರಡಿಸಲಾಗಿದೆ. ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮವು 2015–16ನೇ ಸಾಲಿನಲ್ಲಿ ನೀಲಗಿರಿ ಹಾಗೂ ಅಕೇಶಿಯಾ ಪಲ್ಪ್‌ವುಡ್ ಪೂರೈಕೆ ಮಾಡಲು ಮೆ: ವೆಸ್ಟ್‌ಕೋಸ್ಟ್ ಪೇಪರ್ ಮಿಲ್ಸ್, ದಾಂಡೇಲಿ ಇವರೊಡನೆ ಹಳೆಯ ದರದಲ್ಲಿ ಕರಾರನ್ನು ಮಾಡಿಕೊಂಡಿದ್ದು, ಸದರಿ ಕರಾರು ದಿನಾಂಕ 31.07.2016ರವರೆಗೆ ಚಾಲ್ತಿಯಲ್ಲಿರುತ್ತದೆ. ಈ ಕಾರಣ ಈಗಾಗಲೇ 2015–16ನೇ ಸಾಲಿಗೆ ಮಾಡಿಕೊಂಡಿರುವ ಕರಾರಿನಂತೆ ಅನುಷ್ಠಾನ ಮಾಡಲು ಅನಾನುಕೂಲ ಉಂಟಾಗಿದೆಯೆಂದು ಉಲ್ಲೇಖ(2)ರ ಪತ್ರದಲ್ಲಿ ತಿಳಿಸುತ್ತಾ ಸದರಿ ಕರಾರು ದಿನಾಂಕ 31.07.2016ರವರೆಗೆ ಹಳೆಯ ಟೆಂಕೆತನ ತೀರುವಳಿ ದರದಲ್ಲಿ ಮುಂದುವರಿಸುವ ಕಾರಣ ಉಲ್ಲೇಖ (1)ರ ಸುತ್ತೋಲೆಯನ್ನು ಪರಿಷ್ಕರಿಸಲು ಕೋರಿರುತ್ತಾರೆ. ಈ ಸಂಬಂಧ ಉಲ್ಲೇಖ(3)ರ ಈ ಕಛೇರಿ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದ್ದು, ಸರ್ಕಾರವು ಉಲ್ಲೇಖ(4)ರ ಪತ್ರದಲ್ಲಿ ಅನುಮೋದನೆ ನೀಡಿದೆ. ಅದರನ್ವಯ, ಉಲ್ಲೇಖ(1)ರ ಈ ಕಛೇರಿ ಸುತ್ತೋಲೆಯನ್ನು ಭಾಗಶಃ ಪರಿಷ್ಕರಿಸಿ, ನೀಲಗಿರಿ ಹಾಗೂ ಅಕೇಶಿಯಾ ಪಲ್ಪ್‌ವುಡ್‌ಗೆ ಸಂಬಂಧಿಸಿದಂತೆ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮಕ್ಕೆ ಮಾತ್ರ ಅನ್ವಯವಾಗುವಂತೆ ಹೊಸ ದರಗಳು ದಿನಾಂಕ 01.08.2016ರಿಂದ ಜಾರಿಗೆ ಬರುವಂತೆ ಆದೇಶಿಸಿದೆ.

PR. 647

**ಆರ್.ಎಸ್. ಸುರೇಶ್, ಭಾ.ಅ.ಸೇ.**
ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ.
(ಅರಣ್ಯಪಡೆ ಮುಖ್ಯಸ್ಥರು)

## ಕಂದಾಯ ಸಚಿವಾಲಯ

**ವಿಷಯ :** ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಗೆ ಮಂಜೂರಾಗಿರುವ ವಿವಿಧ ವೃಂದದ ಹಂಗಾಮಿ ಹುದ್ದೆಗಳನ್ನು ಖಾಯಂಗೊಳಿಸುವ ಬಗ್ಗೆ.

**ಉಲ್ಲೇಖ :**
1) ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 22 ಎಸ್.ಎಸ್.ಟಿ. 58, ದಿನಾಂಕ:24.04.1958.
2) ಸರ್ಕಾರದ ಆದೇಶ ಸಂಖ್ಯೆ:ಆರ್ ಡಿ 102 ಎಫ್.ಎಲ್.ಆರ್ 80, ದಿನಾಂಕ:10.10.1980.
3) ಸರ್ಕಾರದ ಆದೇಶ ಸಂಖ್ಯೆ:ಆರ್ ಡಿ 39 ಎಫ್.ಪಿ.ಜಿ. 81, ದಿನಾಂಕ:17.1.1984.
4) ಸರ್ಕಾರದ ಆದೇಶ ಸಂಖ್ಯೆ:ಆರ್ ಡಿ 36 ಎಫ್.ಪಿ.ಜಿ. 84, ದಿನಾಂಕ: 20.07.1984.
5) ಸರ್ಕಾರದ ಆದೇಶ ಸಂಖ್ಯೆ:ಆರ್ ಡಿ 177 ಎಸ್.ಎಲ್.ಆರ್ 80 ದಿನಾಂಕ: 26–07–1982 ಮತ್ತು 13–08–1984.
6) ಸರ್ಕಾರದ ಆದೇಶ ಸಂಖ್ಯೆ:ಆರ್ ಡಿ 96 ಎಸ್.ಎಸ್.ಟಿ. 85, ದಿನಾಂಕ: 13.01.1987.
7) ಸರ್ಕಾರದ ಆದೇಶ ಸಂ:ಕಂಇ 144 ಎಫ್.ಎಲ್.ಆರ್ 78, ದಿನಾಂಕ: 13.01.87.
8) ಸರ್ಕಾರದ ಆದೇಶ ಸಂಖ್ಯೆ: ಆರ್ ಡಿ 227 ಎಸ್.ಎಲ್.ಆರ್. 84, ದಿನಾಂಕ:11–06–87.
9) ಸರ್ಕಾರದ ಆದೇಶ ಸಂಖ್ಯೆ:ಆರ್.ಡಿ. 286, ಎಫ್.ಎಲ್.ಆರ್ 90, ದಿನಾಂಕ:9.9.1991.
10) ಸರ್ಕಾರದ ಆದೇಶ ಸಂಖ್ಯೆ: ಕಂಇ 79 ಎಫ್.ಎಲ್.ಆರ್. 79, ದಿನಾಂಕ: 21–1–92.

11) ಸರ್ಕಾರದ ಆದೇಶ ಸಂಖ್ಯೆ:ಆರ್.ಡಿ. 48 ಎಸ್.ಎಸ್.ಟಿ. 90 ದಿನಾಂಕ: 27.06.1992.

12) ಸರ್ಕಾರದ ಅದೇಶ ಸಂಖ್ಯೆ: ಆರ್.ಡಿ. 122.ಎಫ್.ಎಲ್.ಆರ್. 93, ದಿನಾಂಕ:3.9.1993.

13) ಸರ್ಕಾರದ ಆದೇಶ ಸಂ.ಆರ್.ಡಿ. 30 ಭೂದಾಭೂ 95, ದಿನಾಂಕ: 29-03-96.

14) ಸರ್ಕಾರದ ಆದೇಶ ಸಂ. ಕಂ.ಇ. 30 ಭೂದಾಸೇ.(1) 97, ದಿನಾಂಕ: 12-06-1998.

15) ಸರ್ಕಾರದ ಆದೇಶ ಸಂಖ್ಯೆ: ಕಂಇ 27 ಭೂದಾಪು 2006, ದಿನಾಂಕ: 21.8.2007.

16) ಸರ್ಕಾರದ ಆದೇಶ ಸಂಖ್ಯೆ:ಕಂಇ 98 ಭೂದಾಸ 2007, ದಿನಾಂಕ: 25.11.2008 ಮತ್ತು 20.02.2009.

17) ಸರ್ಕಾರದ ಆದೇಶ ಸಂಖ್ಯೆ: ಕಂಇ 71 ಭೂದಾಪು 2009, ದಿನಾಂಕ: 09.12.2009.

18) ಸರ್ಕಾರದ ಆದೇಶ ಸಂಖ್ಯೆ: ಕಂಇ 155 ಭೂದಾಸ 2009, ದಿನಾಂಕ: 21.5.2010.

19) ಸರ್ಕಾರದ ಆದೇಶ ಸಂ. ಕಂಇ 20 ಭೂದಾಸ 2002, ದಿ: 21.04.2005.

20) ಸರ್ಕಾರದ ಆದೇಶ ಸಂಖ್ಯೆ: ಕಂಇ 95 ಭೂದಾಸ 98(ಭಾಗ) ದಿನಾಂಕ: 04.10.2000.

21) ಸರ್ಕಾರದ ಆದೇಶ ಸಂಖ್ಯೆ: ಕಂಇ 123 ಭೂದಾಸ 2000, ದಿನಾಂಕ: 29.08.2003.

22) ಆಯುಕ್ತರು ಭೂಮಾಪನ, ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರುರವರ ಪತ್ರ ಸಂ. SSLR/EST/MIST-117/15-16, ದಿನಾಂಕ: 30-12-2015 ಮತ್ತು 20-06-2016.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: 1 ರಿಂದ 21 ರಲ್ಲಿನ ಆದೇಶಗಳಲ್ಲಿ, ಭೂಮಾಪನ, ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಗೆ ಸರ್ಕಾರವು ವಿವಿಧ ವೃಂದದ ಹುದ್ದೆಗಳನ್ನು ಸೃಜಿಸಿ ತಾತ್ಕಾಲಿಕವಾಗಿ ಮಂಜೂರು ಮಾಡಲಾಗಿರುತ್ತದೆ. ಮೇಲೆ ಓದಲಾದ ಕ್ರ.ಸಂ.22ರ ಪತ್ರದಲ್ಲಿ ಆಯುಕ್ತರು, ಭೂಮಾಪನ, ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರು ಸರ್ಕಾರವು ಸೃಜಿಸಿರುವ ಸದರಿ ತಾತ್ಕಾಲಿಕ ಹುದ್ದೆಗಳು ಇಲಾಖೆಯ ವಿವಿಧ ಜನಪರ/ರೈತಪರ ಯೋಜನೆಗಳಾದ ಪೋಡಿ ಮುಕ್ತ ಅಭಿಯಾನ, ನೋಂದಣಿ ಪೂರ್ವ ನಕ್ಷೆ ವಿತರಣೆ, ಭೂದಾಖಲೆಗಳ ಸ್ಕ್ಯಾನಿಂಗ್ ಮತ್ತು ಡಿಜಿಟೈಸೇಷನ್, ಸರ್ಕಾರಿ ಜಮೀನುಗಳ ಒತ್ತುವರಿ ತೆರವುಗೊಳಿಸುವ ಕಾರ್ಯ ಆರ್.ಟಿ.ಸಿ. ತಿದ್ದುಪಡಿ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಲು ಅಗತ್ಯವಾಗಿರುತ್ತೆವೆಯೆಂದು ತಿಳಿಸಿರುತ್ತಾರೆ. ಸದರಿ ಹುದ್ದೆಗಳನ್ನು ಸರ್ಕಾರದ ಅನುಮತಿಯೊಂದಿಗೆ ಮಂಜೂರಾದ ದಿನಾಂಕದಿಂದ ಇದುವರೆವಿಗೂ ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರೆಸಿಕೊಂಡು ಬರಲಾಗುತ್ತಿದ್ದು. ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸಿದ ಅವಧಿಯು ದಿನಾಂಕ: 31.03.2016 ಕ್ಕೆ ಮುಕ್ತಾಯಗೊಂಡಿರುತ್ತದೆ ಮತ್ತು ಸರ್ಕಾರದ ಆದೇಶ ಸಂಖ್ಯೆ:ಕಂಇ 123 ಭೂದಾಸ 2000, ದಿನಾಂಕ: 29.08.2003ರಂತೆ ಭೂಮಾಪನ ಇಲಾಖೆಯಲ್ಲಿ ಖಾಲಿ ಇದ್ದ ಹುದ್ದೆಗಳ ಪೈಕಿ ಶೇಕಡ 5% ಮತ್ತು ಶೇಕಡ 80% ರಂತೆ ಹುದ್ದೆಗಳನ್ನು ಕಡಿತಗೊಳಿಸಿರುವ ಬಗ್ಗೆ ಕ್ರಮ ಕೈಗೊಳ್ಳಲಾಗಿದ್ದು. ಕಡಿತಗೊಂಡ ನಂತರ ಭೂಮಾಪನ ಇಲಾಖೆಯಲ್ಲಿ 5958 ತಾತ್ಕಾಲಿಕ ಹುದ್ದೆಗಳು ಮಂಜೂರಾಗಿರುತ್ತವೆ. ಈ ಹುದ್ದೆಗಳನ್ನು 5 ವರ್ಷಗಳಿಗೂ ಮೇಲ್ಪಟ್ಟು ತಾತ್ಕಾಲಿಕವಾಗಿ ಮುಂದುವರೆಸಿಕೊಂಡು ಬರಲಾಗುತ್ತಿದ್ದು, ನಿಯಮಾನುಸಾರ ತಾತ್ಕಾಲಿಕ ಹುದ್ದೆಗಳನ್ನು 5 ವರ್ಷಗಳಿಗೂ ಮೇಲ್ಪಟ್ಟು ಮುಂದುವರೆಸಿದಲ್ಲಿ ಸದರಿ ಹುದ್ದೆಗಳನ್ನು ಖಾಯಂ ಹುದ್ದೆಗಳನ್ನಾಗಿ ಪರಿವರ್ತಿಸಲು ಅವಕಾಶವಿರುತ್ತದೆ. ಮಂಜೂರಾಗಿರುವ ವಿವಿಧ ವೃಂದದ ತಾತ್ಕಾಲಿಕ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿ/ನೌಕರರುಗಳಿಗೆ ಪ್ರತಿ ವರ್ಷವೂ ಯೋಜನೇತರ ವೆಚ್ಚದಡಿಯಲ್ಲಿ ಅನುಬಂಧ-ಬಿ ಯಲ್ಲಿ ಸೇರಿಸಿ, ವೇತನ ಮತ್ತು ಇತರೆ ಭತ್ಯೆಗಳನ್ನು ಪಾವತಿಸಲಾಗುತ್ತಿರುವುದರಿಂದ ತಾತ್ಕಾಲಿಕ ಹುದ್ದೆಗಳನ್ನು ಖಾಯಂಗೊಳಿಸಿದಲ್ಲಿ ಯಾವುದೇ ರೀತಿಯ ವ್ಯತ್ಯಾಸ ಹಾಗೂ ಸರ್ಕಾರಕ್ಕೆ ಆರ್ಥಿಕ ಹೊರೆ ಉಂಟಾಗುವುದಿಲ್ಲ ಎಂದು ತಿಳಿಸುತ್ತಾ. ವಿವಿಧ ವೃಂದದ ತಾತ್ಕಾಲಿಕ ಹುದ್ದೆಗಳನ್ನು ಖಾಯಂಗೊಳಿಸಿ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆಯುಕ್ತರು, ಭೂಮಾಪನ, ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:, ಕಂಇ 06 ಭೂದಾಸ 2016, ಬೆಂಗಳೂರು, ದಿನಾಂಕ: 17.08.2016.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಗೆ ಸರ್ಕಾರವು ವಿವಿಧ ದಿನಾಂಕಗಳ ಆದೇಶಗಳಲ್ಲಿ ಸೃಜಿಸಿ ಮಂಜೂರು ಮಾಡಿರುವ ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ತಿಳಿಸಿರುವ ವಿವಿಧ ವೃಂದದ ಒಟ್ಟು 5958 ತಾತ್ಕಾಲಿಕ ಹುದ್ದೆಗಳನ್ನು ಖಾಯಂಗೊಳಿಸಿ ಆದೇಶಿಸಿದೆ.

ಈ ಹುದ್ದೆಗಳು ಅಪೆಂಡಿಕ್ಸ್-ಬಿ ಯಲ್ಲಿ ಸೇರಿರುವುದನ್ನು ಮತ್ತೊಮ್ಮೆ ಖಚಿತಪಡಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 406 ವೆಚ್ಚ-7/2016, ದಿನಾಂಕ: 16-07-2016ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ. ಪುಟ್ಟನಂಜಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಭೂಮಾಪನ)

**ಸರ್ಕಾರದ ಆದೇಶ ಸಂಖ್ಯೆ: ಕಂಇ 06 ಭೂದಾಸ 2016, ದಿನಾಂಕ: 17.08.2016ರ ಅನುಬಂಧ**

| ಕ್ರ.ಸಂ | ಹುದ್ದೆಗಳ ಪದನಾಮ | ಖಾಯಂಗೊಳಿಸಲಾದ ಹುದ್ದೆಗಳ ಸಂಖ್ಯೆ |
|---|---|---|
| 1. | ಭೂದಾಖಲೆಗಳ ಜಂಟಿ ನಿರ್ದೇಶಕರು | 5 |
| 2. | ಭೂದಾಖಲೆಗಳ ಉಪ ನಿರ್ದೇಶಕರು | 27 |

| ಕ್ರ.ಸಂ | ಹುದ್ದೆಗಳ ಪದನಾಮ | ಖಾಯಂಗೊಳಿಸಲಾದ ಹುದ್ದೆಗಳ ಸಂಖ್ಯೆ |
|---|---|---|
| 3. | ಲೆಕ್ಕಾಧಿಕಾರಿಗಳು | 1 |
| 4. | ಭೂ.ಸ.ನಿ (ಕಾನಿ) | 44 |
| 5. | ಸಹಾಯಕ ನಿರ್ದೇಶಕರು (ಆಡಳಿತ) | 33 |
| 6. | ಅಧೀಕ್ಷಕರು (ಕಾ.ನಿ) | 238 |
| 7. | ಅಧೀಕ್ಷಕರು (ಆಡಳಿತ) | 14 |
| 8. | ಅಧೀಕ್ಷಕರು (ಲೆಕ್ಕ) | 2 |
| 9. | ತಪಾಸಕರು | 617 |
| 10. | ಪ್ರಥಮ ದರ್ಜೆ ನಕಾಶೆಗಾರರು | 4 |
| 11. | ಪ್ರಥಮ ದರ್ಜೆ ಸಹಾಯಕರು | 84 |
| 12. | ಪ್ರಥಮ ದರ್ಜೆ ಭೂಮಾಪಕರು | 7 |
| 13. | ಭೂಮಾಪಕರು | 3024 |
| 14. | ದ್ವಿತೀಯ ದರ್ಜೆ ಸಹಾಯಕರು | 60 |
| 15. | ಡ್ರಾಫ್ಟ್‌ಮಾನ್ | 11 |
| 16. | ಶೀಘ್ರಲಿಪಿಗಾರರು | 3 |
| 17. | ಕಂಪ್ಯೂಟರ್ ಅಸಿಸ್ಟೆಂಟ್ | 1 |
| 18. | ಬೆರಳಚ್ಚುಗಾರರು | 44 |
| 19. | ವಾಹನ ಚಾಲಕರು | 37 |
| 20. | ದಫೇದಾರ್ | 2 |
| 21. | ಕಛೇರಿ ಜವಾನರು | 75 |
| 22. | ದಫ್ತರ್ ಬಂದ್ | 20 |
| 23. | ಪ್ರೋಸಸ್ ಸರ್ವರ್ | 5 |
| 24. | ಬಾಂದು ಜವಾನರು | 1594 |
| 25. | ಆಫ್‌ಸೆಟ್ ಪ್ರಿಂಟರ್ | 1 |
| 26. | ಸಹಾಯಕ ಆಫೆಸೆಟ್ ಪ್ರಿಂಟರ್ | 1 |
| 27. | ಸಹಾಯಕ ಮುದ್ರಣ ನಿರ್ವಹಣೆಗಾರ | 1 |
| 28. | ಅಸಿಸ್ಟೆಂಟ್ ಆಫ್‌ಸೆಟ್ ಪ್ಲೇಟ್ ಮೇಕರ್ | 1 |
| 29. | ಬೈಂಡರ್ | 1 |
| 30. | ಹೆಲ್ಪರ್ | 1 |
| **ಒಟ್ಟು** | | **5958** |

PR. 628

**ಸಿ. ಪುಟ್ಟನಂಜಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಭೂಮಾಪನ)

## ಆರ್ಥಿಕ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಆಇ 7 ಎಸ್‌ಆರ್‌ಪಿ 2016, ಬೆಂಗಳೂರು, ದಿನಾಂಕ: 06-09-2016.**

ಸರ್ಕಾರದ ಆದೇಶ ಸಂಖ್ಯೆ: ಆಇ 7 ಎಸ್‌ಆರ್‌ಪಿ 2016 ದಿನಾಂಕ: 10-03-2016 ರ ಆದೇಶ ಭಾಗದಲ್ಲಿನ ಕೋಷ್ಠಕದಲ್ಲಿ "ಕಲಬುರ್ಗಿ ಮಹಾನಗರಪಾಲಿಕೆ" ಎಂಬ ಪದಗಳ ಬದಲಾಗಿ "ಕಲಬುರ್ಗಿ ಮಹಾನಗರಪಾಲಿಕೆ (ನಗರ ಸಮುಚ್ಚಯ)" ಎಂದು ಓದಿಕೊಳ್ಳತಕ್ಕದ್ದು.

PR. 629
SC. 500

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್.ರಾಜಲಕ್ಷ್ಮಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ. (ಸೇವೆಗಳು-2)

## ಸಹಕಾರ ಸಚಿವಾಲಯ

**ವಿಷಯ :** 2016–17ನೇ ಸಾಲಿಗೆ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯನ್ನು ಮುಂದುವರೆಸಲು ಹಾಗೂ ಹೊಸ ಸದಸ್ಯರುಗಳನ್ನು ನೋಂದಾಯಿಸಲು ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ:ಸಿಒ/163/ಸಿಎಲ್ಎಸ್/2015, ಬೆಂಗಳೂರು ದಿ: 15–04–2016.

2) ಈ ಕಛೇರಿ ಸಮಸಂಖ್ಯೆ ಆದೇಶದ ದಿನಾಂಕ:01–06–2016 ಮತ್ತು 03–08–2016.

3) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್.ಸಿ.ಎಸ್/ಯಶಸ್ವಿನಿ/02/2016–17, ದಿನಾಂಕ:30–08–16.

**ಪ್ರಸ್ತಾವನೆ:**

2016–17ನೇ ಸಾಲಿನ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯನ್ನು ಮೇಲೆ ಓದಲಾದ (1)ರ ಸರ್ಕಾರದ ಆದೇಶದಂತೆ ಜಾರಿಗೊಳಿಸಿ (2) ರ ಸರ್ಕಾರದ ಆದೇಶದಂತೆ ನೊಂದಣಿ ದಿನಾಂಕವನ್ನು ವಿಸ್ತರಿಸಿದ್ದು, ವಿಸ್ತರಿಸಿದ ಅವಧಿ ದಿನಾಂಕ:31–08–2016ಕ್ಕೆ ಕೊನೆಗೊಂಡಿರುತ್ತದೆ. ದಿನಾಂಕ: 26–08–2016ರವರೆಗೆ ಈ ಯೋಜನೆಯಲ್ಲಿ ಕೇವಲ 1,31,688 ಸದಸ್ಯರು ಮಾತ್ರ ನೊಂದಣಿಯಾಗಿರುತ್ತಾರೆ. ಓದಲಾದ (3)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಸದಸ್ಯರನ್ನು ನೊಂದಾಯಿಸುವ ಅವಧಿಯನ್ನು ಸೆಪ್ಟೆಂಬರ್–2016ರ ಅಂತ್ಯದವರೆಗೆ ವಿಸ್ತರಿಸುವಂತೆ ಕೋರಿರುತ್ತಾರೆ. ಈ ಯೋಜನೆಯಡಿ ಹೆಚ್ಚಿನ ಸಂಖ್ಯೆಯ ಸದಸ್ಯರನ್ನು ನೊಂದಣಿ ಮಾಡಲು ನೊಂದಣಿ ದಿನಾಂಕವನ್ನು ವಿಸ್ತರಿಸುವುದು ಅವಶ್ಯವಾಗಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ/163/ಸಿಎಲ್ಎಸ್/2015 ಬೆಂಗಳೂರು, ದಿನಾಂಕ: 06–09–2016.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಸದಸ್ಯರ ನೋಂದಾವಣೆ ಅವಧಿಯನ್ನು ದಿನಾಂಕ:30–09–2016ರವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವೆಂಕಟಸ್ವಾಮಿ,**
ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ,
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR. 630**
**SC. 100**

## ಸಹಕಾರ ಸಚಿವಾಲಯ

**ವಿಷಯ :** 2016–17ನೇ ಸಾಲಿಗೆ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯನ್ನು ಮುಂದುವರೆಸಲು ಹಾಗೂ ಹೊಸ ಸದಸ್ಯರುಗಳನ್ನು ನೋಂದಾಯಿಸಲು ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ:ಸಿಒ/163/ಸಿಎಲ್ಎಸ್/2015, ಬೆಂಗಳೂರು ದಿ: 15–04–2016.

2) ಈ ಕಛೇರಿ ಸಮಸಂಖ್ಯೆ ಆದೇಶದ ದಿನಾಂಕ:01–06–2016 ಮತ್ತು 03–08–2016.

3) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್.ಸಿ.ಎಸ್/ಯಶಸ್ವಿನಿ/02/2016–17, ದಿನಾಂಕ:30–08–16.

**ಪ್ರಸ್ತಾವನೆ:**

2016–17ನೇ ಸಾಲಿನ ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯನ್ನು ಮೇಲೆ ಓದಲಾದ (1)ರ ಸರ್ಕಾರದ ಆದೇಶದಂತೆ ಜಾರಿಗೊಳಿಸಿ (2)ರ ಸರ್ಕಾರದ ಆದೇಶದಂತೆ ನೊಂದಣಿ ದಿನಾಂಕವನ್ನು ವಿಸ್ತರಿಸಿದ್ದು, ವಿಸ್ತರಿಸಿದ ಅವಧಿ ದಿನಾಂಕ:31–08–2016ಕ್ಕೆ ಕೊನೆಗೊಂಡಿರುತ್ತದೆ. ದಿನಾಂಕ:26–08–2016ರವರೆಗೆ ಈ ಯೋಜನೆಯಲ್ಲಿ ಕೇವಲ 1,31,688 ಸದಸ್ಯರು ಮಾತ್ರ ನೊಂದಣಿಯಾಗಿರುತ್ತಾರೆ. ಓದಲಾದ (3)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಸದಸ್ಯರನ್ನು ನೊಂದಾಯಿಸುವ ಅವಧಿಯನ್ನು ಸೆಪ್ಟೆಂಬರ್–2016ರ ಅಂತ್ಯದವರೆಗೆ ವಿಸ್ತರಿಸುವಂತೆ ಕೋರಿರುತ್ತಾರೆ. ಈ ಯೋಜನೆಯಡಿ ಹೆಚ್ಚಿನ ಸಂಖ್ಯೆಯ ಸದಸ್ಯರನ್ನು ನೊಂದಣಿ ಮಾಡಲು ನೊಂದಣಿ ದಿನಾಂಕವನ್ನು ವಿಸ್ತರಿಸುವುದು ಅವಶ್ಯವಾಗಿರುತ್ತದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ/162/ಸಿಎಲ್ಎಸ್/2015 ಬೆಂಗಳೂರು, ದಿನಾಂಕ: 06–09–2016.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಯಶಸ್ವಿನಿ ನಗರ ಸಹಕಾರಿಗಳ ಆರೋಗ್ಯ ರಕ್ಷಣಾ ಯೋಜನೆಯಡಿಯಲ್ಲಿ ಸದಸ್ಯರ ನೋಂದಾವಣೆ ಅವಧಿಯನ್ನು ದಿನಾಂಕ:30–09–2016ರವರೆಗೆ ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವೆಂಕಟಸ್ವಾಮಿ,**
ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ,
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR. 631**
**SC. 100**

**ಸಹಕಾರ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಸಿಒ 578 ಸಿಎಲ್‌ಎಸ್ 2016, ಬೆಂಗಳೂರು, ದಿನಾಂಕ: 07-09-2016.**

ಸರ್ಕಾರದ ಆದೇಶ ಸಂಖ್ಯೆ: ಸಿಒ 578 ಸಿಎಲ್‌ಎಸ್ 2016, ದಿನಾಂಕ: 25-08-2016 ರಲ್ಲಿನ ಆದೇಶ ಭಾಗದಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಮತ್ತು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್‌ಗಳು ರೈತರಿಗೆ ವಿತರಿಸಿದ ಮಧ್ಯಮಾವಧಿ ಸಾಲಗಳಿಗೆ ಕ್ರಮವಾಗಿ ಶೇ.9.5 ಮತ್ತು ಶೇ. 8.5ರ ದರದಲ್ಲಿ ಬಡ್ಡಿ ಸಹಾಯಧನವನ್ನು ನಿಗಧಿಪಡಿಸಿ ಆದೇಶಿಸಲಾಗಿದೆ ಎಂಬುದಾಗಿ ನಮೂದಿಸಿದ್ದು, ಇದರ ಬದಲಾಗಿ "ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಮತ್ತು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್‌ಗಳು ರೈತರಿಗೆ ವಿತರಿಸಿದ ಮಧ್ಯಮಾವಧಿ ಸಾಲಗಳಿಗೆ ಕ್ರಮವಾಗಿ ಶೇ.9.0 ಮತ್ತು ಶೇ.8.0ರ ದರದಲ್ಲಿ ಬಡ್ಡಿ ಸಹಾಯಧನವನ್ನು ನಿಗಧಿಪಡಿಸಿ ಆದೇಶಿಸಲಾಗಿದೆ" ಎಂದು ತಿದ್ದುಪಡಿ ಮಾಡಿ ಆದೇಶಿಸಿದೆ. ಉಳಿದಂತೆ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

**PR. 632**
**SC. 100**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವೆಂಕಟಸ್ವಾಮಿ.**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಸಿಒ 372 ಸಿಎಲ್‌ಎಸ್ 2016, ಬೆಂಗಳೂರು, ದಿನಾಂಕ: 29-08-2016.**

ಸಹಕಾರ ಇಲಾಖೆಯ ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್‌ಎಸ್ 2013, ದಿನಾಂಕ:30.03.2016 ರಲ್ಲಿ 216 ವಿವಿಧ ಸಹಕಾರ ಸಂಘಗಳಿಗೆ ಹೊಸ ಕಟ್ಟಡ/ಗೋದಾಮು ನಿರ್ಮಾಣ ಮತ್ತು ಹಳೆ ಕಟ್ಟಡಗಳ ದುರಸ್ತಿಗಾಗಿ ₹.1549 ಲಕ್ಷಗಳನ್ನು ಬಿಡುಗಡೆ ಮಾಡಿ ಆದೇಶಿಸಲಾಗಿರುತ್ತದೆ. ಸದರಿ ಆದೇಶದಲ್ಲಿ ಈ ಕೆಳಕಂಡ ಸಹಕಾರ ಸಂಘಗಳಿಗೆ ಅನುದಾನ ಬಿಡುಗಡೆ ಹಾಗೂ ಸ್ಥಳ ಬದಲಾವಣೆ ಮಾರ್ಪಡಿಸಿ ತಿದ್ದುಪಡಿ ಮಾಡಿ ಆದೇಶಿಸಿದೆ. ಅದರಂತೆ ಓದಿಕೊಳ್ಳತಕ್ಕದ್ದು, ಉಳಿದಂತೆ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

| ಕ್ರ. ಸಂ. | ಜಿಲ್ಲೆಯ ಹೆಸರು | ಹಾಲಿ ಮಂಜೂರಾತಿ ನೀಡಿ ಅನುದಾನ ಬಿಡುಗಡೆ ಮಾಡಿರುವ ವಿವರ | | | ತಿದ್ದುಪಡಿ ಆದೇಶ ಹೊರಡಿಸಬೇಕಾದ ವಿವರ | | |
|---|---|---|---|---|---|---|---|
| | | ಸಹಕಾರ ಸಂಘದ ಹೆಸರು | ಉದ್ದೇಶ | ಅನುದಾನದ ಮೊತ್ತ | ಸಹಕಾರ ಸಂಘದ ಹೆಸರು | ಉದ್ದೇಶ | ಅನುದಾನದ ಮೊತ್ತ |
| 1. | ಕಲಬುರ್ಗಿ ಜಿಲ್ಲೆ | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಮಾದನಹಿಪ್ಪರಗ, ಆಳಂದ ತಾಲ್ಲೂಕು. | ಕಟ್ಟಡ ನಿರ್ಮಾಣ | 5.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಮಾದನಹಿಪ್ಪರಗ, ಆಳಂದ ತಾಲ್ಲೂಕು, | ಗೋದಾಮು ದುರಸ್ತಿ | 5.00 |
| 2. | ಶಿವಮೊಗ್ಗ ಜಿಲ್ಲೆ | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ತಾಳಗುಪ್ಪ, ಸಾಗರ ತಾಲ್ಲೂಕು. | ಕಟ್ಟಡ ನಿರ್ಮಾಣ | 8.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ತಾಳಗುಪ್ಪ, ಸಾಗರ ತಾಲ್ಲೂಕು. | ಗೋದಾಮು ಕಟ್ಟಡ ನಿರ್ಮಾಣ | 8.00 |
| 3. | ವಿಜಯಪುರ ಜಿಲ್ಲೆ | ಶ್ರೀ ಬೀರಲಿಂಗೇಶ್ವರ ಕುರಿ ಸಾಕಾಣಿಕೆ ಹಾಗೂ ಉಣ್ಣೆ ಉತ್ಪಾದಕರ ಸಹಕಾರಿ ಸಂಘ, ಬಳ್ಳೊಳ್ಳಿ, ಇಂಡಿ ತಾಲ್ಲೂಕು | ಕಟ್ಟಡ ನಿರ್ಮಾಣ | 7.00 | ವ್ಯವಸಾಯೋತ್ಪನ್ನ ಸೇವಾ ಸಹಕಾರಿ ಸಂಘ, ಅಂಜುಟಗಿ, ಇಂಡಿ ತಾಲ್ಲೂಕು | ಕಟ್ಟಡ ನಿರ್ಮಾಣ | 15.00 |
| | | ಶ್ರೀ ಅಮೋಘ ಸಿದ್ದೇಶ್ವರ ಪತ್ತಿನ ಸಹಕಾರ ಸಂಘ ಹೋರ್ತಿ, ಇಂಡಿ ತಾಲ್ಲೂಕು | ಕಟ್ಟಡ ನಿರ್ಮಾಣ | 8.00 | | | |

| ಕ್ರ. ಸಂ. | ಜಿಲ್ಲೆಯ ಹೆಸರು | ಹಾಲಿ ಮಂಜೂರಾತಿ ನೀಡಿ ಅನುದಾನ ಬಿಡುಗಡೆ ಮಾಡಿರುವ ವಿವರ | | | ತಿದ್ದುಪಡಿ ಆದೇಶ ಹೊರಡಿಸಬೇಕಾದ ವಿವರ | | |
|---|---|---|---|---|---|---|---|
| | | ಸಹಕಾರ ಸಂಘದ ಹೆಸರು | ಉದ್ದೇಶ | ಅನುದಾನದ ಮೊತ್ತ | ಸಹಕಾರ ಸಂಘದ ಹೆಸರು | ಉದ್ದೇಶ | ಅನುದಾನದ ಮೊತ್ತ |
| 4 | ಚಿಕ್ಕಮಗಳೂರು ಜಿಲ್ಲೆ | ವಿಎಸ್‌ಎಸ್‌ಎನ್. ಜಯಪುರ ಶೃಂಗೇರಿ ತಾಲ್ಲೂಕು | ಕಟ್ಟಡ ನಿರ್ಮಾಣ | 4.00 | ವಿಎಸ್‌ಎಸ್‌ಎನ್ ಜಯಪುರ, ಕೊಪ್ಪ ತಾಲ್ಲೂಕು | ಕಟ್ಟಡ ನಿರ್ಮಾಣ | 4.00 |
| 5. | ಚಿಕ್ಕಬಳ್ಳಾಪುರ ಜಿಲ್ಲೆ | ಟಿಎಪಿಸಿಎಂಎಸ್, ಗೌರಿಬಿದನೂರು | ಕಟ್ಟಡ ನಿರ್ಮಾಣ | 10.00 | ಟಿಎಪಿಸಿಎಂಎಸ್ ಗೌರಿಬಿದನೂರು | ಕಟ್ಟಡ ದುರಸ್ತಿ | 10.00 |
| | | ವಿಎಸ್‌ಎಸ್‌ಎನ್, ಚಿಕ್ಕಕುರುಗೋಡು ಗೌರಿಬಿದನೂರು ತಾ. | ಕಟ್ಟಡ ನಿರ್ಮಾಣ | 5.00 | ವಿಎಸ್‌ಎಸ್‌ಎನ್, ಚಿಕ್ಕಕುರುಗೋಡು ಗೌರಿಬಿದನೂರು ತಾ. | ಕಟ್ಟಡ ದುರಸ್ತಿ | 5.00 |
| 6 | ಬೆಳಗಾವಿ ಜಿಲ್ಲೆ | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಕಿಣಯೋ, ಬೆಳಗಾವಿ ತಾ. | ಕಟ್ಟಡ ನಿರ್ಮಾಣ | 6.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ತುಮ್ಮರಗುದ್ದಿ ಗ್ರಾಮ, ಬೆಳಗಾವಿ ತಾ. | ಕಟ್ಟಡ ನಿರ್ಮಾಣ | 6.00 |
| | | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಗೊಡಚಿ, ರಾಮದುರ್ಗ ತಾ. | ಗೋದಾಮು ನಿರ್ಮಾಣ | 7.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಗೊಡಚಿ, ರಾಮದುರ್ಗ ತಾ. | ಗೋದಾಮು ದುರಸ್ತಿ | 7.00 |
| | | ಛತ್ರಪತಿ ಶಿವಾಜಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಮಾಂಗೂರ, ಚಿಕ್ಕೋಡಿ ತಾ. | ಕಟ್ಟಡ ನಿರ್ಮಾಣ | 6.00 | ಅರಿಹಂತ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಮಾಂಗೂರ, ಚಿಕ್ಕೋಡಿ ತಾ. | ಕಟ್ಟಡ ನಿರ್ಮಾಣ | 6.00 |
| 7. | ಬೀದರ್ ಜಿಲ್ಲೆ | ಪಟ್ಟಣ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಬ್ಯಾಂಕ್, ಹುಮನಾಬಾದ್ | ಕಟ್ಟಡ ದುರಸ್ತಿ | 6.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಹುಮನಾಬಾದ್ | ಕಟ್ಟಡ ದುರಸ್ತಿ | 6.00 |
| | | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ದುಮ್ಮನಸೂರ್, ಹುಮನಾಬಾದ್ ತಾ. | ಗೋದಾಮು ನಿರ್ಮಾಣ | 8.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ತಾಳಮಾಡಗಿ, ಹುಮನಾಬಾದ್ ತಾ. | ಗೋದಾಮು ನಿರ್ಮಾಣ | 8.00 |
| | | ತಾಲ್ಲೂಕು ವ್ಯವಸಾಯ ಉತ್ಪನ್ನ ಮಾರಾಟ ಸಹಕಾರ ಸಂಘ ನಿ., ಭಾಲ್ಕಿ | ಕಟ್ಟಡ ನಿರ್ಮಾಣ | 8.00 | ಟಿಎಪಿಸಿಎಂಎಸ್, ಹುಮನಾಬಾದ್ | ಕಟ್ಟಡ ನಿರ್ಮಾಣ | 8.00 |
| 8. | ದಾವಣಗೆರೆ ಜಿಲ್ಲೆ | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಕಣವೆ, ಬೆಳಲಗೆರೆ ಗ್ರಾಮ ಚನ್ನಗಿರಿ ತಾ. | ಕಛೇರಿ/ ಗೋದಾಮು ದುರಸ್ತಿ | 2.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಬೆಳಲಗೆರೆ ಗ್ರಾಮ ಚನ್ನಗಿರಿ ತಾ. | ಕಛೇರಿ/ ಗೋದಾಮು ದುರಸ್ತಿ | 2.00 |
| | | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ದೊಡ್ಡರಂಗವ್ವನಹಳ್ಳಿ, ಮಾಯಕೊಂಡ ಕ್ಷೇತ್ರ | ಕಟ್ಟಡ ನಿರ್ಮಾಣ | 5.00 | ಈಜಿಕಟ್ಟು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಮಾಯಾಕೊಂಡ ಕ್ಷೇತ | ಕಟ್ಟಡ ನಿರ್ಮಾಣ | 5.00 |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| ಕ್ರ. ಸಂ. | ಜಿಲ್ಲೆಯ ಹೆಸರು | ಹಾಲಿ ಮಂಜೂರಾತಿ ನೀಡಿ ಅನುದಾನ ಬಿಡುಗಡೆ ಮಾಡಿರುವ ವಿವರ | | | ತಿದ್ದುಪಡಿ ಆದೇಶ ಹೊರಡಿಸಬೇಕಾದ ವಿವರ | | |
|---|---|---|---|---|---|---|---|
| | | ಸಹಕಾರ ಸಂಘದ ಹೆಸರು | ಉದ್ದೇಶ | ಅನುದಾನದ ಮೊತ್ತ | ಸಹಕಾರ ಸಂಘದ ಹೆಸರು | ಉದ್ದೇಶ | ಅನುದಾನದ ಮೊತ್ತ |
| 9. | ಗದಗ ಜಿಲ್ಲೆ | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಹಿರೇವಡ್ಡಟ್ಟಿ, ರೋಣ ತಾ., | ಕಟ್ಟಡ ನಿರ್ಮಾಣ | 7.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಹಿರೇವಡ್ಡಟ್ಟಿ, ಮುಂಡರಗಿ | ಕಟ್ಟಡ ನಿರ್ಮಾಣ | 7.00 |
| | | ವಿ.ಎಸ್.ಎಸ್.ಎನ್., ಹುಣಸಿಕಟ್ಟೆ, ನರಗುಂದ ತಾ | ಕಟ್ಟಡ ನಿರ್ಮಾಣ | 6.00 | ಹುಣಸಿಕಟ್ಟೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಜಗಪೂರ, ನರಗುಂದ ತಾ | ಕಟ್ಟಡ ನಿರ್ಮಾಣ | 6.00 |
| | | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಅಡರಕಟ್ಟಿ ಗದಗ ತಾ. | ಕಟ್ಟಡ ನಿರ್ಮಾಣ | 6.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಅಡರಕಟ್ಟಿ ಶಿರಹಟ್ಟಿ ತಾ. | ಕಟ್ಟಡ ನಿರ್ಮಾಣ | 6.00 |
| 10. | ಮಂಡ್ಯ ಜಿಲ್ಲೆ | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಸುಂಕಾತೊಣ್ಣೂರು, ಪಾಂಡವಪುರ ತಾ., | ಕಟ್ಟಡ ನವೀಕರಣ/ದುರಸ್ತಿಗಾಗಿ | 7.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಸುಂಕಾತೊಣ್ಣೂರು, ಪಾಂಡವಪುರ ತಾ., | ಕಟ್ಟಡ ನಿರ್ಮಾಣ | 7.00 |

**PR. 633**
**SC. 50**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಾಧಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ–3,
ಸಹಕಾರ ಇಲಾಖೆ.

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59.